ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114
5ನೇ ವರ್ಷ 46ನೇ ಸಂಚಿಕೆ ಕೊಪ್ಪ 9-8-1987 ಭಾನುವಾರ ಬೆಲೆ 50 ಪೈಸೆ

## ಬೆಳ್ಳಿಹಬ್ಬ ಆಚರಿಸುವ ಜಯಪುರ ವಿದ್ಯಾಸಂಸ್ಥೆ

ಜಯಪುರ: 1988 ನೇ ಸಾಲಿಗೆ 25 ವರ್ಷಗಳನ್ನು ಪೂರ್ಣಗೊಳಿಸಲಿರುವ 'ಜಯಪುರ ವಿದ್ಯಾಸಂಸ್ಥೆ' ರಜತ ಮಹೋತ್ಸವವನ್ನು ಆಚರಿಸುವ ನಿಟ್ಟಿನಲ್ಲಿ ಸಜ್ಜುಗುತ್ತಿದೆ. ಈ ಸಂದರ್ಭದಲ್ಲಿ ವಿದ್ಯಾಸಂಸ್ಥೆಯ ಪ್ರಗತಿಗಾಗಿ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

ಜಯಪುರ ವಿದ್ಯಾಸಂಸ್ಥೆಯ ಅಧ್ಯಕ್ಷರಾದ ಕೆ. ಎಸ್. ಶ್ರೀನಿವಾಸ್ ಇವರ ಅಧ್ಯಕ್ಷತೆಯಲ್ಲಿ ನಡೆದ ವಾರ್ಷಿಕ ಮಹಾಸಭೆಯಲ್ಲಿ 86-87ನೇ ಸಾಲಿನ ಜಮಾ ಖರ್ಚು ತಖ್ತೆಯನ್ನು ಅಂಗೀಕರಿಸಿ 87-88 ನೇ ಸಾಲಿನ ಮುಂಗಡ ಪತ್ರವನ್ನು ಅನುಮೋದಿಸಲಾಯ್ತು. 87-88 ನೇ ಸಾಲಿಗೆ ಹಿಂದಿನ ಕಾರ್ಯಕಾರಿ ಸಮಿತಿಯೇ ಮುಂದುವರಿಯಬೇಕೆಂದು ತೀರ್ಮಾನಿಸಲಾಯ್ತು.

ಅಧ್ಯಕ್ಷರ ಅಪ್ಪಣೆ ಮೇರೆಗೆ ಮಳಿಗೆ ಚಂದ್ರಶೇಖರ್ ಚರ್ಚೆಯಲ್ಲಿ ಭಾಗವಹಿಸುತ್ತಾ ಬೆಳ್ಳಿ ಹಬ್ಬದ ಸವಿನೆನಪಿಗಾಗಿ ಇಲ್ಲಿ ಕಿರಿಯ ಕಾಲೇಜೊಂದನ್ನು ಸ್ಥಾಪಿಸಬೇಕೆಂದು ಹೇಳಿ, "ರಜತೋತ್ಸವ ಸಮಿತಿ"ಯೊಂದನ್ನು ರಚಿಸುವಂತೆ ಸಲಹೆಯಿತ್ತರು. ಅಧ್ಯಕ್ಷರ ಭಾಷಣದ ನಂತರ ವೆಂಕಟರಮಣ ಶೆಟ್ಟಿ ವಂದಿಸಿದರು.

### ಕಿರಿಯ ಕಾಲೇಜು ಸ್ಥಾಪನೆ?

ಸಂಸ್ಥೆಯ ಉತ್ಸಾಹಿ ಯುವ ಅಧ್ಯಕ್ಷರಾದ ಕೆ.ಎಸ್. ಶ್ರೀನಿವಾಸ್ ಹಾಗೂ ಅನುಭವಿಗಳೂ ಸಾರ್ವಜನಿಕ ಕೆಲಸಗಳಲ್ಲಿ ಮುಂಚೂಣಿಯಲ್ಲಿದ್ದು 25 ವರ್ಷಗಳ ಹಿಂದೆಯೇ ಇಲ್ಲಿ ಪ್ರೌಢ ಶಾಲೆಯ ಸ್ಥಾಪನೆಗೆ ಶ್ರಮಿಸಿ, ಜಯಪುರ ವಿದ್ಯಾಸಂಸ್ಥೆಯ ಮೂಲಕ ಅದರ ಸರ್ವತೋಮುಖ ಅಭಿವೃದ್ಧಿಗೆ ದುಡಿದ ಸಂಸ್ಥೆಯ ಗೌ|| ಕಾರ್ಯದರ್ಶಿ ಎನ್. ವಿ. ಆನಂದರಾಮ ಭಟ್ಟರು ಹಾಗೂ ಸಮಾಜ ಸೇವಾಕಾಂಕ್ಷಿಗಳಾದ ಹಲವು ಮಂದಿ ಗಣ್ಯ ವ್ಯಕ್ತಿಗಳಿರುವ ಈ ಸಂಸ್ಥೆಗೆ ಕಿರಿಯ ಕಾಲೇಜು ಸ್ಥಾಪನೆ ಏನೂ ಕಷ್ಟವಾಗಲಾರದು ಎಂದು ಸಭೆಯ ಸಾಮಾನ್ಯ ಸದಸ್ಯರು ಹಾಗೂ ಸಾರ್ವಜನಿಕರ ಅಭಿಪ್ರಾಯ.

ಅಲ್ಲದೆ ಇಲ್ಲಿ ಕಿರಿಯ ಕಾಲೇಜು ತೆರೆಯುವುದಾದರೆ ತಾವು ಪೂರ್ಣ ಸಹಕಾರ ನೀಡುವುದಾಗಿ ಶಾಸಕ ಗೋವಿಂದ ಗೌಡರು ಆನಂದರಾಮ ಭಟ್ಟರಿಗೆ ಭರವಸೆ ನೀಡಿದ್ದಾರೆ ಎನ್ನಲಾಗಿದೆ. (ವರದಿ: ಕೃಷ್ಣ ಭಂಡಾರಿ)

# ಶೃಂಗೇರಿ ತಾ. ವ್ಯ. ಮಾ. ಸ. ಸಂಘದ ವ್ಯವಹಾರಗಳ 'ಲೋಕಾಯುಕ್ತ' ತನಿಖೆಗೆ ಆಗ್ರಹ, 1 ತಿಂ|| ಗಡುವು

(ವರದಿ: ಕಲ್ಕುಳಿ ವಿಠಲ ಹೆಗ್ಡೆ)

**ಶೃಂಗೇರಿ: ಇಲ್ಲಿನ ತಾಲ್ಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘವಲ್ಲಿ ಜನತಾ ಮುಖಂಡರಿಂದ ಸತತವಾಗಿ ಅವ್ಯವಹಾರ ನಡೆಯುತ್ತಿದೆಯೆಂದು ತಾ|| ಕಾಂಗ್ರೆ ನೇತೃತ್ವದಲ್ಲಿ ಆ. 1ರಂದು ನಡೆದ ಸಭೆ ಆಪಾದಿಸಿದ್ದು, ಈ ಬಗ್ಗೆ ಲೋಕಾಯುಕ್ತದಿಂದ ಕೂಡಲೇ ತನಿಖೆಯಾಗಬೇಕೆಂದೂ, ಒಂದು ತಿಂಗಳೊಳಗೆ ಇಂಥ ತನಿಖೆಯ ವರದಿಯನ್ನು ಸಾರ್ವಜನಿಕರ ಮುಂದಿಡದಿದ್ದರೆ ಶೃಂಗೇರಿ ಬಂದ್ ಆಚರಿಸಲಾಗುವುದೆಂದೂ ಎಚ್ಚರಿಸಿದೆ.**

ಸದರಿ ಸಂಘದ ಕಾರ್ಯದರ್ಶಿ ಶಂಕರಪ್ಪ, ಅವರನ್ನು ಅಮಾನತಿನಲ್ಲಿಟ್ಟು ತನಿಖೆ ನಡೆಸಬೇಕೆಂದು ಒತ್ತಾಯಿಸಲಾಯಿತಲ್ಲದೆ, ಈ ಸಂಘದ ವ್ಯವಹಾರಗಳ ತನಿಖೆಗಾಗಿ ಜಿಲ್ಲಾ ಪರಿಷತ್ತಿನಲ್ಲಿ ಕೆ. ವಿ. ರಾಮಪ್ಪಯ್ಯ ಈಚೆಗೆ ಒತ್ತಾಯಿಸಿದ್ದಕ್ಕೆ ಅವರಿಗೆ ಸಂಘದ ಅಧ್ಯಕ್ಷ ಸುರೇಂದ್ರ ಫೋನಿನಲ್ಲಿ ಬೆದರಿಕೆ ಹಾಕಿದರೆಂಬ ಬಗೆಗೂ ಖಂಡಿಸಲಾಯಿತು.

ಡಿ. ಸಿ. ಸಿ. ಬ್ಯಾಂಕ್ ಅಧ್ಯಕ್ಷ ಕೆ.ಎಂ. ಶ್ರೀನಿವಾಸ್ ಅಧಿಕಾರ ದುರುಪಯೋಗ, ಪಕ್ಷಪಾತ ಮಾಡುತ್ತಿದ್ದಾರೆಂದೂ, ಸದರಿ ಬ್ಯಾಂಕಿನ ಶೃಂಗೇರಿ ಶಾಖಾ ಮ್ಯಾನೇಜರ್ ಸಿದ್ದಪ್ಪ ಸಹಕಾರ ಸಂಘಗಳಲ್ಲಿ ಅವ್ಯವಹಾರಗಳಿಗೆ ಸಹಕರಿಸುತ್ತಿದ್ದಾರೆಂದೂ ಆಪಾದಿಸಲಾಯಿತು. ಅವರನ್ನು ಬೇರೆಡೆಗೆ ವರ್ಗಾಯಿಸಬೇಕೆಂದೂ, ಅಧ್ಯಕ್ಷರ ಮೇಲೆ ಸಿಬಿಐ ತನಿಖೆ ಏರ್ಪಡಿಸಬೇಕೆಂದೂ ಒತ್ತಾಯಿಸಲಾಗಿದೆ.

ನೆಮ್ಮಾರು ವ್ಯ. ಸೇ. ಸಹಕಾರ ಸಂಘ ಅಲ್ಲಿನ ಮಾಜಿ ಕಾರ್ಯದರ್ಶಿಯ ಹಣ ದುರುಪಯೋಗದಿಂದಾಗಿ ಸುಸ್ತಿದಾರ ಸಂಘವಾಗಿದ್ದು, ಅದರ ಸದಸ್ಯರಿಗೆ ಈ ವರ್ಷ ಪುನಃ ಸಾಲ ಕೊಡಿಸುವಲ್ಲಿ ಶ್ರೀನಿವಾಸ್ ತಮ್ಮ ಅಧಿಕಾರದ ಪ್ರಭಾವ ಬಳಸಿದರೆಂಬುದನ್ನು ಅವರ ವಿರುದ್ಧದ ಮೇಲ್ಕಂಡ ಆಪಾದನೆಗಳಿಗೆ ಉದಾಹರಣೆಯಾಗಿ ನೀಡಲಾಗಿದೆ.

## ಭೂ ಕುಸಿತ ಅಧ್ಯಯನ

ಗುಡ್ಡೇತೋಟ: ಇಲ್ಲಿ ಮತ್ತು ಹೆಗ್ಗಾರು ಕೊಡಿಗೆಯಲ್ಲಿ ಹಲವು ವರ್ಷಗಳಿಂದ ನಡೆದಿರುವ ಬೃಹತ್ ಭೂ ಕುಸಿದ ಬಗ್ಗೆ ಬೆಂಗಳೂರಿನ ದಯಾನಂದ ಸಾಗರ ಇಂಜಿನಿಯರಿಂಗ್ ಕಾಲೇಜಿನ ಸಿವಿಲ್ ಇಂ|| ವಿದ್ಯಾರ್ಥಿಗಳ ತಂಡವೊಂದು ಅಧ್ಯಯನ ನಡೆಸಿದ್ದಾರೆ. ಇದರ ವರದಿ ಬಂದ ನಂತರ ಸರ್ಕಾರ ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳುವಂತೆ ಶಾಸಕರು ಪ್ರಯತ್ನಿಸಬೇಕೆಂದು ಜನತೆ ನಿರೀಕ್ಷಿಸುತ್ತಿದ್ದಾರೆ.

## ಬಿಂತ್ರವಳ್ಳಿ ಮಂ| ಪಂಚಾಯ್ತಿ ಪ್ರಥಮ ಸಭೆ

ಕೊಪ್ಪ: ಇಲ್ಲಿನ ಬಿಂತ್ರವಳ್ಳಿ ಮಂಡಲ ಪಂಚಾಯ್ತಿಯ ಮೊದಲ ಸಭೆ ಜು. 31 ರಂದು ಪ್ರಧಾನರಾದ ಕೆ. ವಸಂತ ಅಜಿಲರ ಅಧ್ಯಕ್ಷತೆಯಲ್ಲಿ ನಡೆಯಿತು. ಜಿ. ಪ. ಸದಸ್ಯರಾದ ಬಿ.ಜಿ. ಚಿದಂಬರ್, ಸುಮಿತ್ರಮ್ಮ ಮತ್ತು ಕ್ಷೇತ್ರಾಭಿವೃದ್ಧಿ ಅಧಿಕಾರಿ ರಾಮಮೂರ್ತಿ ಹಾಜರಿದ್ದು, ಸಲಹೆ-ಸೂಚನೆ ನೀಡಿದರು ಕೊಪ್ಪ ತಾ|| ಬರ ಪೀಡಿತವೆಂದು ಘೋಷಿಸಬೇಕೆಂದು ನಿರ್ಣಯಿಸಲಾಯಿತು. ಶಾಂತಾರಾಂ ವಂದಿಸಿದರು.

## ಗಣಪತಿ ಸಮಿತಿ

ಕೊಪ್ಪ: ಇಲ್ಲಿನ ಗುಣವಂತೆ ರಸ್ತೆಯಲ್ಲಿ 3ನೇ ವರ್ಷದ ಗಣಪತಿ ಉತ್ಸವವನ್ನು ಆ. 28 ರಿಂದ 7 ದಿನ ಕಾಲ ನಡೆಸಲು ತೀರ್ಮಾನಿಸಲಾಯಿತು. ಸಮಿತಿಗೆ ಜಿ. ಡಿ. ಪರಮೇಶ್ವರ (ಅಧ್ಯಕ್ಷ), ಜಿ. ಮಂಜು (ಕಾರ್ಯದರ್ಶಿ), ಕೆ. ಜಿ. ಮಂಜು (ಖಜಾಂಚಿ), ಮತ್ತಿತರ ಪದಾಧಿಕಾರಿಗಳನ್ನು ಆಯ್ಕೆ ಮಾಡಲಾಯಿತು. ಉತ್ಸವದ ಪೂರ್ತಿ ದೀಪಾಲಂಕಾರ ಮತ್ತು ಧ್ವನಿವರ್ಧಕದ ಖರ್ಚನ್ನು ಫ್ರಾನ್ಸಿಸ್ ಫೈನಾನ್ಸ್ ಮಾಲೀಕರು ವಹಿಸಿಕೊಂಡಿದ್ದಾರೆ.

## ಅಂಗನವಾಡಿ ಸಮಿತಿ ರಚನೆ

ಭಂಡಿಗಡಿ: ಇಲ್ಲಿನ ಅಂಗನವಾಡಿಗೆ 9 ಜನ ಸದಸ್ಯರನ್ನೊಳಗೊಂಡ ನೂತನ ಸಲಹಾ ಸಮಿತಿಯನ್ನು ಅಂಗನವಾಡಿ ಮೇಲ್ವಿಚಾರಕಿ ಕು|| ಜ್ಞಾನಪೂರ್ಣ ಇವರ ಸಮ್ಮುಖದಲ್ಲಿ ಈಚೆಗೆ ರಚಿಸಲಾಯಿತು. ಸಮಿತಿಯ ಅಧ್ಯಕ್ಷರಾಗಿ ಕು|| ಕೆ. ಎಂ. ರೇವತಿ, ಕಾರ್ಯದರ್ಶಿಯಾಗಿ ಕಾರ್ಯಕರ್ತೆ ಕು|| ಪ್ರಫುಲ್ಲಾ ಆಯ್ಕೆಯಾಗಿದ್ದಾರೆ.

## ನ. ರಾ. ಪುರ ಕಿ|| ಕಾಲೇಜಿಗೆ ಪ್ರಶಸ್ತಿ

ನ. ರಾ. ಪುರ: ಈ ಸಾಲಿನ ಎರಡನೇ ಪಿಯುಸಿ ಪರೀಕ್ಷೆಯಲ್ಲಿ ಇಲ್ಲಿನ ಸರ್ಕಾರಿ ಕಿರಿಯ ಕಾಲೇಜು ಜಿಲ್ಲೆಯಲ್ಲೇ ಅತಿ ಹೆಚ್ಚು ಶೇಕಡಾವಾರು ಫಲಿತಾಂಶ ಗಳಿಸಿದ್ದು, ಈ ಬಗ್ಗೆ ಈಚೆಗೆ ಚಿಕ್ಕಮಗಳೂರಿನಲ್ಲಿ ಜಿಲ್ಲಾ ಪರಿಷತ್ ಅಧ್ಯಕ್ಷ ಕೆ. ಎಂ. ಕೃಷ್ಣಮೂರ್ತಿಯವರಿಂದ ಕಾಲೇಜು ಪ್ರಿನ್ಸಿಪಾಲ್ ನಂಜುಂಡ ಭಟ್ಟ ಅವರು ಪ್ರಶಸ್ತಿ ಸ್ವೀಕರಿಸಿದರು. (ವರದಿ: ನವಿಲೂರು ಪ್ರಕಾಶ್)

## ಸಸಿ ನೆಡುವ ಕಾರ್ಯಕ್ರಮ

ಶೃಂಗೇರಿ: ಇಲ್ಲಿನ ಜೇಸೀಸ್ ಮತ್ತು ಎಸಿಸಿಯವರ ಸಹಯೋಗದೊಂದಿಗೆ ಅರಣ್ಯ ಇಲಾಖೆಯು ದುರ್ಗಾ ದೇವಸ್ಥಾನದ ಬಳಿ ಸಸಿ ನೆಡುವ ಕಾರ್ಯಕ್ರಮವನ್ನು ಈಚೆಗೆ ಏರ್ಪಡಿಸಿತ್ತು. ವಿದ್ಯಾರಣ್ಯಪುರ ಮಂಡಲ ಪ್ರಧಾನ-ಉಪಪ್ರಧಾನರು, ತಹಸೀಲ್ದಾರ್ ಮುಂತಾದವರು ಮುಖ್ಯ ಅತಿಥಿಗಳಾಗಿದ್ದರು. ಜೇಸೀ ಅಧ್ಯಕ್ಷ ಶಾಂತಮೂರ್ತಿ ಐತಾಳ್ ಅಧ್ಯಕ್ಷತೆ ವಹಿಸಿದ್ದರು.

# ಹುಲಿ ಬಂತು ಹುಲಿ!

(ವರದಿ: 'ಟೀಜೆ')

ನರಸಿಂಹರಾಜಪುರ: ಈ ತಾಲ್ಲೂಕಿನಲ್ಲಿ ಅಲ್ಪ ಸ್ವಲ್ಪ ಬಿತ್ತಿದ ಬೆಳೆಗಳು ಮಳೆಯಿಲ್ಲದೆ ಸುಟ್ಟು ಹೋಗುತ್ತಿದ್ದರೆ, ಇನ್ನೊಂದು ಕಡೆ ಹುಲಿ, ಆನೆಗಳು ಕಾಡಿನಿಂದ ನಾಡಿಗೆ ದಾಳಿಯಿಟ್ಟು, ಮೊದಲೇ ದಿಕ್ಕು ತೋಚದಾಗದ್ದ ಬಡ ರೈತನಿಗೆ ಇನ್ನೇನು ಹುಚ್ಚು ಹಿಡಿಯುವಂತೆ ಮಾಡಿವೆ.

ಈ ತಾಲ್ಲೂಕಿನ ಅಳೇಹಳ್ಳಿ, ಹೆನ್ನಂಗಿ, ಬೆಳ್ಳಂಗಿ, ಹೊಸೂರು, ಅರಗಿ, ಮುಂಡಿಗೆಮನೆ ಮುಂತಾದ ಊರುಗಳಲ್ಲಿ ಹುಲಿ, ಆನೆಗಳ ಕಾಟ ಸಹಿಸಲು ಅಸಾಧ್ಯವಾದಷ್ಟು ಮುಂದುವರಿದಿದ್ದರೂ ಅರಣ್ಯ ಇಲಾಖೆಯವರು ಇದರ ಬಗ್ಗೆ ಹೆಚ್ಚಿನ ಕಾಳಜಿಯೇನೂ ವಹಿಸಿಲ್ಲ. ಮುಂಡಿಗೆಮನೆಯ ಹಲವು ರೈತರ ಕಬ್ಬಿನ ಬೆಳೆಗಳನ್ನು ಮತ್ತು ಇನ್ನೂ ಚಿಗುರುತ್ತಿರುವ ಭತ್ತದ ಸಸಿಗಳನ್ನು ಕಾಡಾನೆಗಳು ಧ್ವಂಸ ಮಾಡಿದ್ದರೆ, ಅರಗಿ, ಹೊಸೂರು, ಅಳೇಹಳ್ಳಿ, ಹೆನ್ನಂಗಿಗಳಲ್ಲಿ ಒಂದು ಎತ್ತು, 4 ಹಸು ಮತ್ತು ನಾಲ್ಕು ಕುರಿಗಳನ್ನು ಹುಲಿಗಳು ನುಂಗಿ ನೀರು ಕುಡಿದಿವೆ.

ಈ ರೀತಿಯ ಹಾವಳಿಯನ್ನು ಪ್ರತಿ ವರ್ಷವೂ ರೈತರು ಅನುಭವಿಸುತ್ತಿದ್ದು, ಇದರ ಬಗ್ಗೆ ಅಧಿಕಾರಿಗಳಿಗೆ, ಶಾಸಕರಿಗೆ, ಮಂತ್ರಿಗಳವರೆಗೂ ಮನವಿ ಸಲ್ಲಿಸಿದ್ದು, ಸೂಕ್ತ ಕ್ರಮ ಕೈಗೊಳ್ಳುವುದಾಗಿ ನೀಡಿದ್ದ ಆಶ್ವಾಸನೆ ಯಾಕೋ ಸುಳ್ಳಾದಂತೆ ಕಾಣುತ್ತಿದೆ. ವಿಪರ್ಯಾಸವೆಂದರೆ, ಬಡ ರೈತರಿಗೆ ರಸ್ತೆಯಲ್ಲೇ ಹುಲಿ, ಕಾಡಾನೆಗಳು ಸಿಕ್ಕಿದರೆ, ಅಧಿಕಾರಿಗಳಿಗೆ ಕಾಡಾನೆಗಳ ಲದ್ದಿ ಮತ್ತು ಹುಲಿಯ ಹೆಜ್ಜೆ ಮಾತ್ರ ಸಿಕ್ಕುತ್ತಿರುತ್ತವೆ!

ಅಂಡಮಾನ್ ನಿಕೋಬಾರ್‌ಗಳನ್ನು ನೆನಪಿಗೆ ತರುವಂತಹ ಈ ಕುಗ್ರಾಮಗಳಿಗೆ ವಿದ್ಯುತ್ ಸೌಕರ್ಯವಿಲ್ಲ, ರಸ್ತೆ ಸೌಲಭ್ಯವಿಲ್ಲ. ಹೀಗೆಯೇ ಬಿಟ್ಟರೆ ಇಲ್ಲಿಯ ಜನಗಳು ಕಾಡುಮನುಷ್ಯರಾಗಿ ಪರಿವರ್ತನೆಯಾದರೂ ಆಶ್ಚರ್ಯವಿಲ್ಲ!

ಇನ್ನಾದರೂ 'ಜನ ಪ್ರತಿನಿಧಿ'ಗಳು, ಸಂಬಂಧಪಟ್ಟ ಅಧಿಕಾರಿಗಳು ಈ ಕಡೆ ಗಮನ ಕೊಟ್ಟು ಕ್ರಮ ಕೈಗೊಳ್ಳಬೇಕಾಗಿದೆ.

# ಬದಲಾವಣೆ-ಬೆಳವಣಿಗೆ ನಿರಂತರ, ಅನಿವಾರ್ಯ

ಒಂದು ಸಮಾಜದ ರಾಜಕೀಯ, ಸಾಂಸ್ಕೃತಿಕ ಮತ್ತು ಸಾಮಾಜಿಕ ರಂಗಗಳಲ್ಲಿ, ಅಂದರೆ ಒಟ್ಟಾರೆ ಸಮಾಜದ ಜೀವನದಲ್ಲಿ ಬದಲಾವಣೆ ನಿರಂತರವಾಗಿ ಆಗುತ್ತಿರುತ್ತದೆ, ಹೊಸತು ಬೆಳವಣಿಗೆಯಾಗುತ್ತಲೇ ಇರುತ್ತದೆ. ಈ ಮಾತನ್ನು ನಮ್ಮ ಮತ್ತು ನಮ್ಮ ಸುತ್ತ ಮುತ್ತಲ ಬದುಕಿನ ಹಲವಾರು ಸಂಗತಿಗಳಿಂದ ನಾವು ಸ್ಪಷ್ಟವಾಗಿ ಗುರುತಿಸಬಹುದು.

ನಮ್ಮ ಸಮಾಜದ ರಾಜಕೀಯ ರಂಗ ತೆಗೆದುಕೊಂಡರೆ ನಮ್ಮನ್ನು ಮೊದಲು ಸಣ್ಣ ಪುಟ್ಟ ಪಾಳೇಗಾರರು ಆಳುತ್ತಿದ್ದರು. ಅಲ್ಲಿಂದ ಮುಂದೆ ರಾಜರು, ಅನಂತರ ಪರಕೀಯರು (ಪೋರ್ಚುಗೀಸರು, ಬ್ರಿಟಿಷರು ಇತ್ಯಾದಿ); ಈಗ ಸದ್ಯಕ್ಕೆ ನಮ್ಮ ದೇಶದ ಶ್ರೀಮಂತ ವರ್ಗ ಪ್ರಜಾಪ್ರಭುತ್ವದ ಹೆಸರಿನಲ್ಲಿ ಆಳುತ್ತಿದೆ ಈಗಿನ ರಾಜಕೀಯ ಪರಿಸ್ಥಿತಿಯೂ ನಮಗೆ ತೃಪ್ತಿ ನೀಡುತ್ತಿಲ್ಲ. ಆದ್ದರಿಂದ ಈ ಪರಿಸ್ಥಿತಿ ಕೂಡಾ ಸಕಾಲದಲ್ಲಿ ಬದಲಾವಣೆಗೊಳ್ಳಲೇಬೇಕಾಗುತ್ತದೆ.

ಸಾಂಸ್ಕೃತಿಕ ರಂಗ ತೆಗೆದುಕೊಂಡರೆ, ಬಯಲಾಟ, ನಾಟಕದಿಂದ, ಪರದೆಯ ಮೇಲಿನ ಸಿನಿಮಾ ಆಗಿ ಈಗ 'ತ್ರೀ-ಡಿ' ಸಿನಿಮಾಗಳೂ ಬಂದಿವೆ. ಇದೇ ರೀತಿ ಸಂಗೀತ, ನೃತ್ಯ, ಚಿತ್ರ, ಶಿಲ್ಪ-ಇತ್ಯಾದಿ ಎಲ್ಲ ಕಲಾ ಪ್ರಕಾರಗಳಲ್ಲೂ ಬದಲಾವಣೆಗಳಾಗುತ್ತಿವೆ.

ನಮ್ಮ ಓಡಾಟದ ವಾಹನ ಸೌಕರ್ಯಗಳೇ ನೋಡಿ. ಎತ್ತು, ಕುದುರೆ ಗಾಡಿಯಿಂದ, ಕಾರು, ಆಕಾಶದಲ್ಲಿ ಹಕ್ಕಿಗಳ ಹಾಗೆ ಹಾರಾಡುವ ವಿಮಾನಗಳ ತನಕ, ಸ್ಪುಟ್ನಿಕ್, ರಾಕೆಟ್‌ಗಳ ತನಕ ಮುಂದುವರಿದಿದೆ. ನಾವು ವಾಸಿಸುತ್ತಿರುವ ಮನೆ ಹುಲ್ಲಿನ ಮಾಡು, ಹಂಚಿನ ಮಾಡಿನಿಂದ, ಹಲವಾರು ಅಂತಸ್ತಿನ ತಾರ್ಸಿಕಟ್ಟಡಗಳವರೆಗೆ ಬಂದಿದೆ.

ಹೀಗೆಯೇ ನಮ್ಮ ಸಾಮಾಜಿಕ ಜೀವನದಲ್ಲಿ ಕೂಡ ಬದಲಾವಣೆ, ಬೆಳವಣಿಗೆ ನಿರಂತರವಾಗಿ ಸಾಗಿದೆ. ಸ್ತ್ರೀ ಪ್ರಧಾನವಾದ ಗುಂಪು ಜೀವನದಿಂದ ಪುರುಷ ಪ್ರಧಾನವಾದ ಈಗಿನ ಸಮಾಜದ ತನಕ ಬದಲಾಗುತ್ತಾ ಸಾಗಿದೆ. ಹಿಂದಿನ ವ್ಯವಸ್ಥೆಯಲ್ಲಿ ಜಾತಿಗಳಿರಲಿಲ್ಲ; ಗಂಡು, ಹೆಣ್ಣು ತಮಗೆ ಬೇಕಾದ ಆಯ್ಕೆ ತಾವೇ ಮಾಡಿಕೊಳ್ಳುತ್ತಿದ್ದರು. ಕರ್ಮ (ಕೆಲಸ) ವಿಭಜನೆಗೋಸ್ಕರ ಗುಂಪುಗಳಾಗಿ ವಿಂಗಡಿಸಲ್ಪಟ್ಟರೂ ಮದುವೆ ಬಗ್ಗೆ ನಿರ್ಬಂಧವಿರಲಿಲ್ಲ. ಕಾಲಕ್ರಮೇಣ ಇವು ಈಗಿರುವ ಜಾತಿ ವ್ಯವಸ್ಥೆಗೆ ಬದಲಾದುವು. ಆದರೆ, ಈಗ ಜಾತಿಗೂ ಕರ್ಮಕ್ಕೂ ಸಂಬಂಧವೇ ಇಲ್ಲದಿರುವುದರಿಂದ ಜಾತಿ ವ್ಯವಸ್ಥೆ ಕ್ಷೀಣವಾಗುತ್ತಿರುವುದು ಸಹಜವೇ ಆಗಿದೆ. ಕೆಲಸ, ಆಹಾರ-ವಿಹಾರ, ವಾಸ, ಒಡನಾಟ ಮುಂತಾದ ಬೇರೆಲ್ಲಾ ವಿಚಾರಗಳಲ್ಲೂ ಜಾತಿಯ ಕಟ್ಟು ಪಾಡು ಈಗಾಗಲೇ ಕಳಚಿ ಹೋಗಿದೆ. ಮದುವೆಯ ಆಯ್ಕೆಯ ವಿಚಾರವೊಂದರಲ್ಲಿ ಮಾತ್ರ ಅದಿನ್ನೂ ಉಳಿದುಕೊಂಡಿದೆ.

ನಾವು ವಿದ್ಯಾವಂತರಾದಂತೆ ನಮ್ಮ ಆಚಾರ, ವಿಚಾರ, ಉಡುಗೆ ತೊಡಿಗೆಗಳಲ್ಲಿ

**ಹೇಮಲತಾ ಶೆಣೈ ಕೆ., ಕೊಪ್ಪ**

ಬದಲಾವಣೆ ಆಗುತ್ತಾ ಬಂದಿದೆ. ಕೆಲವೇ ವರ್ಷಗಳ ಹಿಂದೆ ಗಂಡ ಸತ್ತಾಗ ಹೆಂಗಸು ಸಹಗಮನ ಅಥವಾ ಕೇಶಮುಂಡನ ಮಾಡದಿದ್ದಲ್ಲಿ, ಮದುವೆಗೆ ಮೊದಲು ಮಗಳು ಮೈನೆರೆದಲ್ಲಿ ಸಾಮಾಜಿಕ ಬಹಿಷ್ಕಾರ ಹಾಕುತ್ತಿದ್ದರು. ಆದರೆ ಈಗ ಪರಿಸ್ಥಿತಿ ಹಾಗಿಲ್ಲ; ಬದಲಾಗಿದೆ. ವಿಚಾರವಂತರು ಮತ್ತು ಕರುಳ ಕುಡಿಯನ್ನು ಕಣ್ಣೆದುರೆ ಚಿವುಟಲಿಕ್ಕಾಗದ ಹೃದಯವಂತರು ಇಂತಹದನ್ನು ಪ್ರತಿಭಟಿಸಿದ್ದರಿಂದ ಪರಿಸ್ಥಿತಿ ಬದಲಾಯಿತು. ಸರಕಾರ ಕೂಡ ಕಾನೂನಿನ ರಕ್ಷಣೆ ನೀಡಿತು. ಹೆಂಗಸರು ವಿದ್ಯಾವಂತರಾಗಿ ಕೆಲಸಕ್ಕೆ ಹೋಗುವುದಾಗಲೀ, ಒಬ್ಬ ವ್ಯಕ್ತಿ ವಿದ್ಯಾರ್ಜನೆಗೋಸ್ಕರ ಹೊರ ದೇಶಗಳಿಗೆ ಸಮುದ್ರಯಾನ ಮಾಡುವುದಾಗಲೀ, ನಮ್ಮ ಉಡುಗೆ ಪಂಚೆಯಿಂದ ಪ್ಯಾಂಟ್-ಸೂಟಿಗೆ ಬದಲಾದದ್ದಾಗಲೀ, ಸಮಾಜ ಸಲೀಸಾಗಿ ಏನೂ ಒಪ್ಪಿಕೊಂಡದ್ದಲ್ಲ. **ಈ ಎಲ್ಲ ಸಂದರ್ಭಗಳಲ್ಲೂ ಮೊದಲ ಹೆಜ್ಜೆ ಇಟ್ಟವರು ಸಾಕಷ್ಟು ಹಿಂಸೆ ಅನುಭವಿಸಿದ್ದಾರೆ.**

ತುಂಬಾ ಓದಿ ಕೆಲಸಕ್ಕೆ ಹೋದ ಹುಡುಗಿಯರನ್ನು ಮದುವೆಯಾಗಲು ಹಿಂದೆ-ಮುಂದೆ ನೋಡುತ್ತಿದ್ದರು, ಪ್ಯಾಂಟ್ ಧರಿಸಿದವರನ್ನು ಅಪಹಾಸ್ಯ ಮಾಡುತ್ತಿದ್ದರು. ಸಮುದ್ರಯಾನ ಮಾಡಿದವರಿಗೆ ಬಹಿಷ್ಕಾರವೇ ಹಾಕುತ್ತಿದ್ದರು. ಆದರೆ, ಈಗ ಪರಿಸ್ಥಿತಿ ಎಷ್ಟು ಭಿನ್ನವಾಗಿದೆ ನೋಡಿ. ಓದದ ಹುಡುಗಿಯರನ್ನು ಮದುವೆಯಾಗಲು ಹುಡುಗರು ಇಷ್ಟಪಡುವುದಿಲ್ಲ. ಹೊರದೇಶಕ್ಕೆ ಹೋಗುವುದು ಬಹುದೊಡ್ಡ ಸಾಧನೆಯ ಲಕ್ಷಣ. ಅಂಥವನನ್ನು ಅಳಿಯನನ್ನಾಗಿ ಪಡೆಯಲು ಹಾತೊರೆಯುತ್ತಾರೆ. ಹಾಗೆಯೇ ಪ್ಯಾಂಟ್, ಸೂಟ್ ಧರಿಸುವುದು ನಾಗರಿಕತೆಯ ಲಕ್ಷಣವಾಗಿದೆ. ಬಹುಶಃ ಇನ್ನು ಕೆಲವು ವರ್ಷಗಳು ಉರುಳಿದರೆ, ಅದನ್ನು ಧರಿಸದವರು ಅನಾಗರಿಕರು, ಹಿಂದುಳಿದವರು ಅನ್ನಿಸಬಹುದೇನೋ.

ಬಹಳ ದೂರವೇಕೆ? ಕೆಲವೇ ವರ್ಷಗಳ ಹಿಂದೆ ಬ್ರಾಹ್ಮಣರು ನೇಗಿಲು ಹಿಡಿದು ಹೂಟಿ ಮಾಡುವುದು 'ಶಾಸ್ತ್ರ ನಿಷಿದ್ಧ'ವಿತ್ತು! ಆದರೆ, ಕೆಲಸದಾಳುಗಳು ಸುಸೂತ್ರವಾಗಿ ಸಿಗದಾಗ ಇದೇ ಶೃಂಗೇರಿ ತಾಲ್ಲೂಕಿನ ಗೋಚವಳ್ಳಿ ಗ್ರಾಮದ ಬ್ರಾಹ್ಮಣರೊಬ್ಬರು ನೇಗಿಲು ಹಿಡಿದು ಹೂಟಿ ಮಾಡಿದ

(3ನೇ ಪುಟಕ್ಕೆ)

## ಸ್ವಯಂಉದ್ಯೋಗಯೋಜನೆ: ಅರ್ಜಿ ಸಲ್ಲಿಕೆ ಅವಧಿ ಆ. 31ಕ್ಕೆ ವಿಸ್ತರಣೆ

ಕೊಪ್ಪ : ಸ್ವಯಂ ಉದ್ಯೋಗ ಯೋಜನೆಯನ್ವಯ ಸಾಲ ಕೋರಿ ಅರ್ಜಿ ಸಲ್ಲಿಸಲು **ಕಡೇ ದಿನಾಂಕ : ಅಗಸ್ಟ್ 31** ಆಗಿದ್ದು, ಐ.ಟಿ.ಐ. ತೇರ್ಗಡೆಯಾದವರು ಸಹ ಅರ್ಜಿ ಸಲ್ಲಿಸಬಹುದು. ಅಂಥವರಿಗೆ ಮತ್ತು ಮಹಿಳೆಯರಿಗೆ ಆದ್ಯತೆಯಿದೆ. ಪ. ಜಾತಿ/ಪಂಗಡಗಳವರಿಗೆ ಶೇ. 30ರಷ್ಟು ಅವಕಾಶಗಳನ್ನು ಕಾದಿರಿಸಲಾಗಿದೆ ಈ ಪ್ರದೇಶದಲ್ಲಿ ಸ್ಥಾಪಿಸಬಹುದಾದ ಕೈಗಾರಿಕೆ ಮತ್ತಿತರ ಉದ್ಯಮಗಳ ಪಟ್ಟಿ ಕೈಗಾರಿಕಾ ವಿಸ್ತರಣಾಧಿಕಾರಿಗಳಲ್ಲೂ, ಜಿಲ್ಲಾ ಕೇಂದ್ರ ಗ್ರಂಥಾಲಯ ಶಾಖೆಗಳಲ್ಲೂ ದೊರೆಯುತ್ತದೆ.

## ಮೃತ ಕಾರ್ಮಿಕ ಮಹಿಳೆಯ ಪತಿಗೆ 30,000ರೂ. ಪರಿಹಾರ

ಕೊಡಿಗೆಹಿತ್ಲು ಗ್ರೂಪ್ ಆಫ್ ಎಸ್ಟೇಟ್ಸ್‌ನಲ್ಲಿ ಕಾರ್ಮಿಕಳಾಗಿದ್ದ ರಾಧು ಎಂಬಾಕೆ 5-6-86ರಂದು ಕೆಲಸ ಮಾಡುತ್ತಿದ್ದಾಗ ಹಾವು ಕಚ್ಚಿ ಸಾವಪ್ಪಿದ್ದು, ಆಕೆಯ ಪತಿ ಅಣ್ಣು ಕಾರ್ಮಿಕ ಪರಿಹಾರ ಕಾಯ್ದೆಯಡಿ ಹೂಡಿದ್ದ ಮೊಕದ್ದಮೆಯಲ್ಲಿ ಚಿಕ್ಕಮಗಳೂರಿನ ಕಾರ್ಮಿಕ ಅಧಿಕಾರಿ ಹಾಗೂ ಸಂಧಾನಾಧಿಕಾರಿ ಕರಿಯಪ್ಪನವರು ತೀರ್ಪು ನೀಡಿ, 23,068 ರೂ. ಪರಿಹಾರ, 5767 ರೂ. ದಂಡ, 5-7-86ರಿಂದ ಬಡ್ಡಿ — ಇದಿಷ್ಟನ್ನೂ ನೀಡುವಂತೆ ಆದೇಶಿಸಿದ್ದಾರೆ.

### ಬಗರ್‌ಹುಕುಂ ಬಡ ಸಾಗುವಳಿದಾರರ ಮೇಲೆ ದಬ್ಬಾಳಿಕೆ ಆರೋಪ :

## ಕೊಪ್ಪ ಡಿ ಎಫ್ ಒ ಕಚೇರಿಗೆ ಸಿ ಪಿ ಐ ನೇತೃತ್ವದಲ್ಲಿ ಮುತ್ತಿಗೆ

ಆಗಸ್ಟ್ 3 ರಂದು ಕೊಪ್ಪ ವಿಭಾಗ ಅರಣ್ಯಾಧಿಕಾರಿಗಳ ಕಛೇರಿಯೆದುರು ಸಿ.ಪಿ.ಐ. ಕಾರ್ಯಕರ್ತರು ಜಿಲ್ಲಾ ಕಾರ್ಯದರ್ಶಿ ಬಿ. ಕೆ. ಸುಂದರೇಶ್ ನೇತೃತ್ವದಲ್ಲಿ ಉಗ್ರವಾದ ಪ್ರತಿಭಟನೆಯೊಂದನ್ನು ನಡೆಸಿದರು. ನ. ರಾ. ಪುರ ತಾಲ್ಲೂಕಿನ ವಿವಿಧೆಡೆ ಬಗರ್ ಹುಕುಂ ಸಾಗುವಳಿ ಮಾಡಿರುವ ಬಡ ಭೂರಹಿತರ ಮೇಲೆ ಅರಣ್ಯ ಇಲಾಖೆ ಅಧಿಕಾರಿಗಳು ದಬ್ಬಾಳಿಕೆ ಮಾಡುತ್ತಿದ್ದಾರೆಂಬುದು ಸ್ಥೂಲವಾದ ಕಾರಣವಾದರೆ, ದಾವಣ ಗ್ರಾಮದಲ್ಲಿಬಗರ್‌ಹುಕುಂ (ಟಿ.ಟಿ.) ಜಮೀನಿನಲ್ಲಿ ನೆಟ್ಟಿದ್ದ ಕಾಫಿ ಗಿಡಗಳನ್ನು ಕಡಿದು ಹಾಕಿ, ಮಹಿಳೆಯೊಬ್ಬರ ಮೇಲೆ ಕೈ ಮಾಡಿದ್ದಾರೆಂಬುದು ಪ್ರತಿಭಟನೆಗೆ ಪ್ರಮುಖ ಪ್ರಚೋದನೆ ನೀಡಿತ್ತು.

**ವಿವರ**

ಚಳುವಳಿಗಾರರು ಹೇಳುವಂತೆ, ದಾವಣ ಗ್ರಾಮದ ಹರಾವರಿ ಎಂಬಲ್ಲಿ ಸ. ನಂ. 21 ರಲ್ಲಿ ಬಾಲಕೃಷ್ಣ ಭಟ್ಟ ಎಂಬವರು ಸುಮಾರು 12 ವರ್ಷಗಳಿಂದ ವಾಸವಾಗಿದ್ದು, ನಾಲ್ಕೈದು ಎಕರೆ, ಬಗರ್ ಹುಕುಂ ಸಾಗುವಳಿಯಲ್ಲಿ ಭತ್ತ, ಅಡಿಕೆ, ಬಾಳೆ, ಕಾಫಿ ಮುಂತಾದುವನ್ನು ಬೆಳೆದುಕೊಂಡು ಜೀವನ ಮಾಡುತ್ತಿದ್ದಾರೆ. ಅಲ್ಲಿ ನೀರಿನ ಅನುಕೂಲವಿದ್ದು, ಭೂಮಿ ಕೂಡ ಫಲವತ್ತಾಗಿ, ಕೃಷಿಗೆ ಯೋಗ್ಯವಾದುದಾಗಿದೆ.

ಈಚಿಗೆ ಅರಣ್ಯ ಇಲಾಖೆಯವರು ಇಲ್ಲಿ ಪ್ಲಾಂಟೇಶನ್ ಬೆಳೆಸಲು ಟ್ರೆಂಚ್ ತೋಡಿ ತಂತಿಬೇಲಿ ಹಾಕಿದ್ದು, ಅದರಲ್ಲಿ ಇವರು ಕಾಫಿ ಗಿಡ ಬೆಳೆಸಿದ್ದ ಭೂಮಿಯನ್ನೂ ಸೇರಿಸಿದ್ದಾರೆ. ಇದೇ ರೀತಿ ಇನ್ನೂ ಹಲವರು ಸಾಗುವಳಿ ಮಾಡುತ್ತಿದ್ದ ಭೂಮಿಯನ್ನೂ ವಶಪಡಿಸಿಕೊಂಡಿದ್ದಾರೆ ಎನ್ನುತ್ತಾರೆ.

**ಗಿಡ ಕಡಿದರು**

ಜು. 21 ರಂದು ಕೊಪ್ಪದ ಡಿಎಫ್‌ಒ ಹಾಗೂ ಚಿಕ್ಕಗ್ರಹಾರ ರೇಂಜರ್ ಲಕ್ಷ್ಮೀನಾರಾಯಣ ತಮ್ಮ ಸಿಬ್ಬಂದಿಯೊಡನೆ ಬಂದು, ಬಾಲಕೃಷ್ಣ ಅವರ ಮಡದಿ ಲಕ್ಷ್ಮೀದೇವಿಯವರಿಂದ ಕತ್ತಿಯನ್ನು ಕಿತ್ತುಕೊಂಡು ಅಲ್ಲಿದ್ದ 2-3 ವರ್ಷ ಪ್ರಾಯದ ಸುಮಾರು 800 ಕ್ಕೂ ಹೆಚ್ಚು ಕಾಫಿ ಗಿಡಗಳನ್ನೆಲ್ಲ ಕತ್ತರಿಸಿ ಹಾಕಿದರೆಂದೂ, ಗಿಡ ಕಡಿಯಬೇಡಿ ಎಂದು ಗೋಗರೆಯಲು ಬಂದ ಆಕೆಯನ್ನು ಕೈ ಹಿಡಿದು ಡಿಎಫ್‌ಒ ಅವರೇ ದೂಡಿದಾಗ ಆಕೆಯ ಕೈ ಬಳೆಗಳು ಒಡೆದು ಹೋದವೆಂದೂ, "ಮನೆ ಬೇಕೆಂದಿದ್ದರೆ ಸುಮ್ಮನೆ ಮನೆಗೆ ಹೋಗು ಇಲ್ಲವಾದರೆ ಮನೆಯನ್ನೂ ಬಿಡಿಸಿ ಓಡಿಸ್ತೇನೆ" ಎಂದು ಬೆದರಿಕೆ ಹಾಕಿದರೆಂದೂ ಲಕ್ಷ್ಮೀದೇವಿ ಹೇಳುತ್ತಾರೆ.

ಬಾಲಕೃಷ್ಣ ಭಟ್ಟ ಅವರು ಅಪಘಾತಕ್ಕೀಡಾಗಿ ಮಣಿಪಾಲದ ಆಸ್ಪತ್ರೆಯಲ್ಲಿದ್ದಾರೆ. ಅವರಿಲ್ಲದ ವೇಳೆ ಈ ದಬ್ಬಾಳಿಕೆ ನಡೆದಿದೆ. ಅವರು 4 ಎಕರೆ 38 ಗುಂಟೆ ಭೂಮಿಯನ್ನು, ಸುಮಾರು 9-10 ವರ್ಷದಿಂದಲೂ ಮಾಡಿಕೊಂಡಿದ್ದು, 86ರ ನವೆಂಬರ್‌ನಲ್ಲಿ ಸುಮಾರು ಒಂದೂವರೆ ಸಾವಿರ ರೂ.ಗೆ

(3ನೇ ಪುಟಕ್ಕೆ)

## 'ಕಾಮಧೇನು' ಅನಿಲ ಘಟಕಕ್ಕೂ ಸಬ್ಸಿಡಿ

ಕೊಪ್ಪ: ಮಣ್ಣಿನ ಬಾನಿಗಳನ್ನು ಕವುಚಿ ಇಟ್ಟು ರಚಿಸುವ, ಅತಿ ಕಡಿಮೆ ಖರ್ಚಿನ ನೂತನ ವಿಧಾನವಾದ 'ಕಾಮಧೇನು' ಸಗಣಿ ಅನಿಲ ಘಟಕಗಳಿಗೆ ಸಹ ಸಬ್ಸಿಡಿ ನೀಡಲು ಜಿಲ್ಲಾ ಪರಿಷತ್ ಸಮ್ಮತಿಸಿ, ಆದೇಶ ಹೊರಡಿಸಿದೆ. ಸದ್ಯಕ್ಕೆ ಇದು ಕೊಪ್ಪ, ಶೃಂಗೇರಿ, ನ.ರಾ. ಪುರ ತಾ||ಗಳಿಗೆ ಮಾತ್ರ ಅನ್ವಯವಾಗಲಿದ್ದು, ಪ್ರತಿ ಘಟಕಕ್ಕೂ 3660 ರೂ. ಸಬ್ಸಿಡಿ ನೀಡಲಾಗುವುದು.

ಈ ವರ್ಷ ಈ ಮೂರೂ ತಾ||ಗಳ ಕ್ಷೇತ್ರ ಅಭಿವೃದ್ಧಿ ಅಧಿಕಾರಿಗಳಿಗೆ ತಲಾ 15 ಹಾಗೂ ಕೊಪ್ಪದ ಕೃಷಿ ಇಲಾಖೆಗೆ 5 ಘಟಕಗಳನ್ನು ಕನಿಷ್ಠ ಗುರಿಯಾಗಿ ನಿಗದಿಪಡಿಸಲಾಗಿದೆ. (ಅದನ್ನು ಮೀರಿಯೂ ನಿರ್ಮಾಣವಾಗುವ ಘಟಕಗಳಿಗೆ ಕೂಡ ಸಬ್ಸಿಡಿ ಇರುತ್ತದೆ.)

'ಕಾಮಧೇನು' ವಿನ್ಯಾಸದಂತೆ 10-12 ಜನರ ಕುಟುಂಬಕ್ಕೆ ಅನಿಲ ಪೂರೈಸಲು ಬೇಕಾಗುವಂಥ ಘಟಕಕ್ಕೆ ಸುಮಾರು 7,500 ರೂ. ಮಾತ್ರ ಖರ್ಚು ಬರುತ್ತದೆ. ಕೊಪ್ಪ ತಾಲ್ಲೂಕಿನಲ್ಲಿ ಈಗಾಗಲೇ ಸುಮಾರು 40ಕ್ಕೂ ಹೆಚ್ಚು ಇಂಥ ಘಟಕಗಳು ಅತ್ಯಂತ ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿವೆ.

# ಕೊಪ್ಪ ಡಿ ಎಫ್ ಒ ಕಚೇರಿಗೆ ಮುತ್ತಿಗೆ: ಅರಣ್ಯದ ರಕ್ಷಣೆ ಎಲ್ಲಿ, ಹೇಗೆ — ಕೆಲವು ಅನ್ನಿಸಿಕೆಗಳು

(2ನೇ ಪುಟದಿಂದ)

ನುಕ್ಕಿ ಟಿ. ಟಿ. ಕಟ್ಟಿಸ್ಸಾರೆ. (4 ಎಕರೆ ಎಂದು ಅವರಲ್ಲಿರುವ ಒಂದು ದಾಖಲೆ ತಿಳಿಸುತ್ತದೆ.) ಭೂಮಿಯನ್ನು ಖಾಯಂ ಮಾಡಿಕೊಡುವುದಾಗಿ ರೆವಿನ್ಯೂ ಅಧಿಕಾರಿಗಳು ಹೇಳಿದ್ದಾರೆ.

ಅಸಂಖ್ಯ ಮಂದಿ ಪ್ಲಾಂಟರುಗಳು, ಶ್ರೀಮಂತರು, ನೂರಾರು ಎಕರೆ ಒತ್ತುವರಿ ಮಾಡಿ ಕೃಷಿ ಯೋಗ್ಯ ಭೂಮಿ, ದಟ್ಟ ಕಾಡುಗಳೆನ್ನದೆ ಎಲ್ಲವನ್ನೂ ಆಕ್ರಮಿಸಿಕೊಂಡು ಬಡವರಿಗೆ ಭೂಮಿಯಿಲ್ಲದಂತೆ ಮಾಡಿದ್ದು, ಅವರ ಮೇಲೆ ಏನೂ ಕ್ರಮ ಕೈಗೊಳ್ಳಲಾರದ ಈ ಅಧಿಕಾರಿಗಳು ಬಡವರ ಮೇಲೆ ಮಾತ್ರ ದಬ್ಬಾಳಿಕೆ ನಡೆಸುತ್ತಿದ್ದಾರೆ—ಎಂದು ಚಳುವಳಿಗಾರರು ಆಪಾದಿಸುತ್ತಾರೆ.

ಅದೇ ಗ್ರಾಮದಲ್ಲಿ, ಬಗರ್‌ಹುಕುಂ ಸಾಗುವಳಿಯಲ್ಲಿ ಅಡಿಕೆ, ಬಾಳೆ, ಲಿಂಬೆ ಹುಲ್ಲು ವಗೈರೆ ಬೆಳೆಯುತ್ತ 9 ವರ್ಷದಿಂದ ಕಂದಾಯ ಕಟ್ಟುತ್ತಿರುವ ಆದಂ, ಇಸ್ಮಾಯಿಲ್, ಮಹಮ್ಮದ್ ಎಂಬವರ ಮೇಲೂ ಅರಣ್ಯಾಧಿಕಾರಿಗಳು ಇದೇ ರೀತಿ ಕ್ರಮ ಕೈಗೊಳ್ಳಲೆತ್ನಿಸಿ ಅದರ ವಿರುದ್ಧ ನ್ಯಾಯಾಲಯದಿಂದ ತಡೆಯಾಜ್ಞೆ ಪಡೆಯಲಾಗಿದೆ ಎಂದು ಚಳುವಳಿಯ ಕಾರ್ಯಕರ್ತರು ಹೇಳುತ್ತಾರೆ.

**"ಕೈ ಮಾಡಿಲ್ಲ" : ಡಿ.ಎಫ್.ಒ**

ತಾನು ಯಾವುದೇ ಮಹಿಳೆಯ ಮೇಲೆ ಕೈ ಮಾಡಿಲ್ಲ ಎನ್ನುವ ಡಿಎಫ್‌ಒ ಕಿಶನ್ ಸಿಂಗ್ ಸುಗಾರ, ತಮ್ಮ ಸಿಬ್ಬಂದಿ ಕಾನೂನಿನಂತೆ ಮಾತ್ರ ತಮ್ಮ ಕರ್ತವ್ಯ ನಿರ್ವಹಿಸಿದ್ದಾರೆ ಎನ್ನುತ್ತಾರೆ.

ತಾವು ಮಾನವೀಯತೆಯಿಂದ ಅಲ್ಲಿನ ಬಗರ್‌ಹುಕುಂದಾರರಿಗೆಲ್ಲ ಅವರು ಸಾಗು ಮಾಡುತ್ತಿರುವ ಭೂಮಿಯನ್ನು ಬಹುತೇಕ ಪೂರ್ತಿಯಾಗಿ ಬಿಟ್ಟುಕೊಟ್ಟು, ಅವರನ್ನೆಲ್ಲ ಸಮಾಲೋಚಿಸಿಯೇ ಟ್ರೆಂಚ್ ತೋಡಿದ್ದು. ತಕರಾರು ಬಂದಿರುವ ಈ ಭೂಮಿಯಲ್ಲಿ ಕೂಡ ಹೆಚ್ಚಿನ ಕಾಫಿ ಗಿಡಗಳಿರಲಿಲ್ಲ, ಇದ್ದ ಹತ್ತಿಪ್ಪತ್ತು ಗಿಡಗಳು ಒಂದು ವರ್ಷದೊಳಗಿನವು. ಅವರಿಗೆ ಕೂಡ ಜಂಟಿಯಾಗಿ ನಾಲ್ಲಿ ಮೂರೂವರೆ–ನಾಲ್ಕು ಎಕರೆಯಷ್ಟು ಬಿಟ್ಟುಕೊಟ್ಟು, ನೇರವಾಗಿ ಟ್ರೆಂಚ್ ಹೊಡೆಯುವ ಸೌಕರ್ಯಕ್ಕಾಗಿ ಹೀಗೆ ಮಾಡಿದ್ದು ಹೊರತು ದಬ್ಬಾಳಿಕೆ ಮಾಡಿಲ್ಲ ಎನ್ನುತ್ತಾರೆ ರೇಂಜರ್ ಲಕ್ಷ್ಮೀನಾರಾಯಣ.

**ತಾತ್ಕಾಲಿಕ ಒಡಂಬಡಿಕೆ**

ಇಡೀ ದಿನ ನಡೆದ ಪ್ರತಿಭಟನೆ, ಧರಣಿಯ ನಂತರ ಪ್ರತಿಭಟನಾಕಾರರಿಗೂ ಅಧಿಕಾರಿಗಳಿಗೂ ಮಾತುಕತೆಯಾಗಿ, ಬಾಲಕೃಷಭಟ್ಟ ಅವರ ಬಳಿಯಿರುವ ದಾಖಲೆಗಳಿಗೆ ಅನುಸಾರವಾಗಿ ಸರ್ವೆ ಮಾಡಿಸುವವರೆಗೆ ಯಥಾ ಸ್ಥಿತಿಯನ್ನು ಎರಡು ಕಡೆಯವರೂ ಮುಂದುವರಿಸಬೇಕೆಂದೂ, ಮೊದಲಿನಂತೆ ಬೇಲಿ ಮಾತ್ರ ಹಾಕಿಕೊಳ್ಳಬಹುದೆಂದೂ ಒಪ್ಪಲಾಯಿತು.

**ಸಮಸ್ಯೆಗಳ ತಳಕು**

ಈ ಮೇಲಿನ ತಾತ್ಕಾಲಿಕ ಒಡಂಬಡಿಕೆಯಿಂದಾಗಿ ಸದ್ಯಕ್ಕೇನೋ ಈ ಸಮಸ್ಯೆ ನಮ್ಮೆದುರಿನಿಂದ ಹಿಂದೆ ಸರಿದಿರಬಹುದಾದರೂ, ಇದು ಮುಕ್ತಾಯವಲ್ಲ. ಅಥವಾ ಈ ರೀತಿ ಭೂರಹಿತರ, ಬಡವರ ಬಗರ್‌ಹುಕುಂ ಸಾಗುವಳಿಯ ಸಮಸ್ಯೆ ಇರುವುದೂ ಇಲ್ಲಿ ಮಾತ್ರವಲ್ಲ. ದಲಿತ ಸಂಘರ್ಷ ಸಮಿತಿ,ರೈತ ಸಂಘ, ಕಮ್ಯುನಿಸ್ಟ್ ಪಕ್ಷಗಳ ರೈತ ಘಟಕಗಳು ಮುಂತಾದ ಸಂಘಟನೆಗಳು ಈ ಪ್ರಶ್ನೆಯನ್ನೆತ್ತಿಕೊಂಡು ಹಲವಾರು ಕಡೆ ಹೋರಾಟಗಳನ್ನು ನಡೆಸುತ್ತಲೇ ಇವೆ. ಹೆಚ್ಚಿನ ಸಂದರ್ಭಗಳಲ್ಲಿ ಇದೊಂದು **ಆಯಾ ಅಧಿಕಾರಿಗಳ ಪ್ರತಿಷ್ಠೆಯ ಪ್ರಶ್ನೆ ಎಂಬಂತಾಗಿ, ವಿಕೋಪಕ್ಕೆ ಹೋಗಿ, ನೂರಾರು ಮಂದಿ ಬಡಜನ ಹಿಂಸೆ, ದಬ್ಬಾಳಿಕೆ ಅನುಭವಿಸಬೇಕಾಗಿದೆ. ನ. ರಾ. ಪುರ ತಾಲ್ಲೂಕಿನ ಈ ಸಮಸ್ಯೆ ಕೂಡ ಹೀಗೆ ಅಧಿಕಾರಿಗಳ ಪ್ರತಿಷ್ಠೆಯ ಪ್ರಶ್ನೆಯಾಗುವ ಭಯ ಇಲ್ಲದಿಲ್ಲ.**

ಬಡವರ ಭೂಮಿ ದಾಹ ಒಂದು ಕಡೆ, ಅರಣ್ಯಗಳನ್ನು ಉಳಿಸಿಕೊಳ್ಳಬೇಕಾಗಿರುವುದೊಂದು ಕಡೆ—ಈ ಎರಡು ಸಮಸ್ಯೆಗಳು ಇಲ್ಲಿ ತಳುಕು ಹಾಕಿಕೊಂಡಿವೆ. ಇದನ್ನು ತೆರೆದ ಮನಸ್ಸಿನಿಂದ, ಸ್ವಲ್ಪ ಕೂಲಂಕಷವಾಗಿ ವಿವೇಚಿಸಬೇಕಾದ ಅಗತ್ಯವಿದೆ.

**ವಿಷಮತೆ**

ನಮ್ಮ ಈ ವಿಶಾಲ ದೇಶದಲ್ಲಿ ಎಲ್ಲ ಬಗೆಯ ಸಂಪತ್ತುಗಳೂ ಹೇರಳವಾಗಿದ್ದರೂ, ಸಂಪತ್ತಿನ ಹಂಚಿಕೆ ಮತ್ತು ಹತೋಟಿಯಲ್ಲಿನ ತೀವ್ರ ವಿಷಮತೆಯಿಂದಾಗಿ, ಇಲ್ಲಿನ ಬೆಳೆಯುತ್ತಿರುವ ಜನಸಂಖ್ಯೆಯಲ್ಲಿ ಹೆಚ್ಚೆಚ್ಚು ಜನರಿಗೆ ಬದುಕಿನ ಅವಕಾಶಗಳು ಅಲಭ್ಯವಾಗುತ್ತಿವೆ. ಲಭ್ಯವಿರುವ ಎಲ್ಲ ಸಂಪನ್ಮೂಲಗಳನ್ನೂ ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಲು ಆಗದಂಥ ಸಾಮಾಜಿಕ–ಆರ್ಥಿಕ ವಿಷಮತೆಯಿಂದಾಗಿ ದುಡಿಯುವ ಕೈಗಳಿಗೆ ಸೂಕ್ತವಾದ (ಅಂದರೆ ಜೀವನಕ್ಕೆ ಸಾಕಾಗುವಷ್ಟು ಆದಾಯ ತರಬಲ್ಲ) ಉದ್ಯೋಗ ದೊರೆಯದಾಗಿದೆ. ಹಳ್ಳಿಗಾಡಂತೂ ಈ ಸಮಸ್ಯೆಯಿಂದ ತತ್ತರಿಸುತ್ತಿದೆ.

ಹಳ್ಳಿಗಳಲ್ಲಿ ಇದ್ದಬದ್ದ ಕೃಷಿ ಯೋಗ್ಯ ಭೂಮಿಯೆಲ್ಲ ಈಗಾಗಲೇ ಆಸ್ತಿವಂತರ ಪಾಲಾಗಿದೆ. ಉಳಿದಿರಬಹುದಾದ ಅಲ್ಪಸ್ವಲ್ಪ ಕೃಷಿಯೋಗ್ಯ ಭೂಮಿ 'ಅರಣ್ಯ ಇಲಾಖೆಯದು' ಎನ್ನಿಸಿಕೊಂಡಿದೆ. ಆದರೆ, ಕೃಷಿಯ ಹೊರತು ಬೇರೆ ವೃತ್ತಿ ಅರಿಯದ ಅಥವಾ ಬೇರೆ ಅವಕಾಶಗಳಿಲ್ಲದ ಬಡವರಿಗೆ ಈ ಅರಣ್ಯ–ಕಂದಾಯ ಎಂಬ ಸೀಮಾರೇಖೆಗಳು ಕಾಣುತ್ತಿಲ್ಲ. ಅವರಿಗೆ ಕಾಣುವುದು ಇಷ್ಟೇ—

ಇಲ್ಲಿ ಸ್ವಲ್ಪ ಭೂಮಿಯಿದೆ. (ಅದರಲ್ಲಿ ಅಲ್ಪ ಸ್ವಲ್ಪ ಕಾಡು–ಮರಗಳು ಇರಬಹುದು ಅಥವಾ ಬರೀ ಕುರುಚಲಿರಬಹುದು.. ಆದರೆ ಅದು ಕೃಷಿಗೆ ಆಗುವಂಥದು ) ಮಳೆ–ಗಾಳಿ ಅನುಕೂಲವಾದರೆ ಅದರಲ್ಲಿ ಏನಾದರೂ ಸ್ವಲ್ಪ ಬೆಳೆದುಕೊಳ್ಳಬಹುದು. ಕೆಲವೆಡೆ ನೀರಿನ ಅನುಕೂಲತೆ ಕೂಡ ಇರುತ್ತದೆನ್ನಿ. ಇತ್ತ ಆಸ್ತಿವಂತರು–ಶ್ರೀಮಂತರು ತಮಗೆ ಬೇಕೆನಿಸಿದ ಕಡೆ, ಬೇಕಾದಷ್ಟು ಭೂಮಿಯನ್ನು ವಶಪಡಿಸಿಕೊಂಡು ಕೋಟೆ–ಗೀಟೆ ಮಾಡುತ್ತಲೇ ಇದ್ದಾರೆ. ನಮಗೂ ಅದೊಂದೇ ದಾರಿ. ಅವರಿಗೆ ಇಲ್ಲದ ಅಡ್ಡಿ ನಮಗೇನು ಇದ್ದೀತು?....

**ಕಾಡೂ ಉಳಿಯಬೇಕು**

ಆದರೆ ಇತ್ತ ಇನ್ನೊಂದು ಸಾಮಾಜಿಕ ಜವಾಬ್ದಾರಿಯೂ ಇದೆ—ಅರಣ್ಯಗಳನ್ನು ಉಳಿಸುವ, ಬೆಳೆಸುವ ಜವಾಬ್ದಾರಿ. ಕೇವಲ ಐವತ್ತೋ ನೂರೋ ವರ್ಷಗಳ ಹಿಂದೆ ದೇಶದ ಅರ್ಧವೋ ಮುಕ್ಕಾಲೋ ಭಾಗ ದಟ್ಟವಿದ್ದು, ಈಗ್ಗೆ ಕಡೇ ಪಕ್ಷ ಮೂರರಲ್ಲೊಂದು ಭಾಗವಾದರೂ ಇರಲೇಬೇಕಾಗಿದ್ದ (ಪರಿಸರ ಸಮತೋಲನ, ಮಳೆ – ಬೆಳೆ ದೃಷ್ಟಿಯಿಂದ) ಅರಣ್ಯ ಇಂದು ನಮ್ಮಲ್ಲಿ ಕೇವಲ ಶೇಕಡ 10ರಷ್ಟಕ್ಕೆ ಇಳಿದಿದೆ. ಹೀಗೇ ಆದರೆ ನಮ್ಮ ಕಣ್ಣೆದುರೇ, ಇನ್ನು ಕೇವಲ ಹತ್ತಿಪ್ಪತ್ತು ವರ್ಷಗಳಲ್ಲೇ, ಇಡೀ ದೇಶ ಬೆಂಗಾಡಾದೀತು. ಆದೀತು ಏನು ! ಈಗಾಗಲೇ ಹಾಗೆ ಆಗುತ್ತಿರುವುದನ್ನು ತಡೆಯುವುದೂ ಸಾಧ್ಯವಿಲ್ಲವೇನೋ—ಎಂಬ ಪರಿಸ್ಥಿತಿಯಲ್ಲಿ ನಾವಿದ್ದೇವೆ.

ಆದ್ದರಿಂದ ಈಗ ತಕ್ಷಣಕ್ಕೆ–ಇರುವಷ್ಟು ಅರಣ್ಯವಾದರೂ ಉಳಿಯಬೇಕು; ಬೋಳು–ಬಂಜರು ಭೂಮಿಯಲ್ಲೆಲ್ಲ ಏನಾದರೂ ಹಸಿರು ಬೆಳೆಯಬೇಕು; ಅರಣ್ಯ ಭೂಮಿಯ ಆಕ್ರಮಣ–ಒತ್ತುವರಿ ವಿಪರೀತ ಹೆಚ್ಚಿದೆ, ಅದು ನಿಲ್ಲಬೇಕು....

ಆದರೆ ಎಲ್ಲಿ, ಹೇಗೆ? ಎಂಬುದು ಪ್ರಶ್ನೆ.

**ಎಲ್ಲಿ, ಹೇಗೆ ?**

ಲಂಚ, ಕಳ್ಳತನ, ಕಲಬೆರಕೆ, ಶೆಂಗೆಗಳ್ಳತನ, ಕಳ್ಳ ಸಾಗಣೆ....ಅಂತೆಯೇ

(4ನೇ ಪುಟಕ್ಕೆ)

# ಬದಲಾವಣೆ-ಬೆಳವಣಿಗೆ ನಿರಂತರ, ಅನಿವಾರ್ಯ

(2ನೇ ಪುಟದಿಂದ)

ರು. ಬಿತ್ತು ಅವರಿಗೆ ಬಹಿಷ್ಕಾರ. ಆದರೆ ನೇಗಿಲು ಹಿಡಿವವರ ಸಂಖ್ಯೆಯೇ ಜಾಸ್ತಿಯಾದ ಕೂಡಲೇ ಇಂತಹ ಬಹಿಷ್ಕಾರಗಳು ನಿಂತು ಹೋದವು. ಬರೇ ಒಂದು ಇಪ್ಪತ್ತು ಇಪ್ಪತ್ತೈದು ವರ್ಷಗಳ ಹಿಂದಿನ ಮಾತಿದು.

ಅಂತರ್ಜಾತಿ ವಿವಾಹಗಳ ಪ್ರಸಂಗಗಳಾದರೂ ಅಷ್ಟೆ. ಬರೀ ಒಂದೆರಡು ನಡೆದಾಗ ಅದಕ್ಕೆ ಬಹಿಷ್ಕಾರ ಇತ್ಯಾದಿ ನಡೆದರೂ ಇಂಥವುಗಳು ತುಂಬಾ ಆದಾಗ, ನಾನು ಮೇಲ್ಕಂಡ ಎಲ್ಲಾ ಪ್ರಕರಣಗಳಲ್ಲಿ ಹೇಳಿದಂತೆ ಈ ಪ್ರಕರಣದಲ್ಲಿಯೂ ಬಹಿಷ್ಕಾರ ಇತ್ಯಾದಿ ನಿಲ್ಲುತ್ತದೆ.

ಇಲ್ಲಿ ಅಂತರ್ಜಾತಿ ವಿವಾಹ ಯಾತಕ್ಕಾಗಬೇಕು ಎನ್ನುವುದು ಮೂಲಭೂತ ಪ್ರಶ್ನೆಯಾಗುತ್ತದೆ.'ಬದುಕು' ಬೇಕು ಎನ್ನುವುದು ಎಲ್ಲರಿಗೂ ಇರುವ ಆಸೆ. ಆದರೆ ಇಂದು ಹುಡುಗಿಯರಿಗೆ ಮದುವೆಯ ಸಮಸ್ಯೆ ಇರುವುದೆಂಬುದು ವಾಸ್ತವ ಅಂಶ. ಮದುವೆಗೋಸ್ಕರ ಹುಡುಗಿಯರು 30–35 ವರ್ಷಗಳ ತನಕ ಕಾಯಬಹುದು ಎಂಬುದು ಕೆಲವರ ವಾದ. ಜೀವನ ನಿರ್ವಹಣೆಗೆ ಯಾವ ಉದ್ಯೋಗದ ಅವಕಾಶವೂ, ಮನೋರಂಜನೆಯೂ ಇಲ್ಲದೆ ಪರಾಧೀನವಾದ ಒಂಟಿ ಬದುಕು ಇಂತಹ ಹಳ್ಳಿಗಳಲ್ಲಿ ಇಷ್ಟು ದೀರ್ಘ ಕಾಲ ಬದುಕುವುದು ಅಷ್ಟು ಸುಲಭವಲ್ಲ. ಮಾತ್ರವಲ್ಲ ಯಾವ ಮನುಷ್ಯ ಆದರೂ ಸಕಾಲದಲ್ಲಿ ಮದುವೆಯಾಗಬೇಕು ಎಂದು ಆಶೆ ಇಟ್ಟುಕೊಂಡಿರುವುದು ಸಹಜ.

ಸಹಜವಾದ ಜೀವಿತಕ್ಕೆ ಬೇಕಾಗಿರುವ ಒಂದು ಮದುವೆ ಇಂತಹ ದೊಡ್ಡ ಸಮಸ್ಯೆಯಾಗಲು ಪ್ರಬಲವಾದ ಕಾರಣಗಳು ಇರಲೇ ಬೇಕಲ್ಲವೆ? ಕಾರಣಗಳಿವೆ ಎಂದ ಮೇಲೆ ಪರಿಹಾರೋಪಾಯ ಕೂಡಾ ಇರುತ್ತದೆ. ಇಂಥ ಪರಿಹಾರೋಪಾಯಗಳಲ್ಲಿ ಪ್ರಪ್ರಥಮವಾದುದು ಅಂತರ್ಜಾತಿ ವಿವಾಹ. ಗಂಡಸರ ಸಂಖ್ಯೆಗಿಂತ ಹೆಂಗಸರ ಸಂಖ್ಯೆ ಕಡಿಮೆ ಇರುವ ನಮ್ಮ ಸಮಾಜದಲ್ಲಿ ಹೆಣ್ಣಿನ ಮದುವೆ ನಿಜವಾಗಿಯೂ ಸಮಸ್ಯೆಯಾಗಿರುವುದು ಒಂದು ವಿಪರ್ಯಾಸ.

**ಅನಿವಾರ್ಯತೆ**

ವೈಚಾರಿಕತೆ ಮತ್ತು ಅನಿವಾರ್ಯತೆಯೇ ಮಾನವ ಜನಾಂಗವನ್ನು ಬದಲಾವಣೆಯೆಡೆಗೆ ತಳ್ಳುತ್ತವೆ. ಬಲಾತ್ಕಾರ ಅಥವಾ ಹಿಂಸೆಯಿಂದ ಇದನ್ನು ತಡೆಗಟ್ಟುವುದು ಸಾಧ್ಯವಿಲ್ಲ ಎಂಬುದಕ್ಕೆ ಇಲ್ಲಿಯ ತನಕ ಮತ್ತು ಈಗಲೂ ಸಾಮಾಜಿಕ ಬದಲಾವಣೆ ಆಗುತ್ತಾ ಇರುವುದೇ ಉದಾಹರಣೆ. ಈ **ಬದಲಾವಣೆಯಲ್ಲಿ ಯಾವಾಗಲೂ ಬದುಕಿನ ಅಸ್ತಮಾನದಲ್ಲಿರುವ ಹಳಬರ ಯೋಚನೆಗಳಲ್ಲಿ ಹೊಸ ಪೀಳಿಗೆಗೆ ಉಪಯುಕ್ತವಾದವುಗಳನ್ನು ಬಿಟ್ಟು ಉಳಿದುವೆಲ್ಲ ಅವರ ಜೊತೆಗೆ ನಶಿಸಿ ಹೋಗುತ್ತವೆ. ಹೊಸ ಪೀಳಿಗೆಯ ಯೋಚನೆಗಳೇ, ಆ ಪೀಳಿಗೆಯನ್ನು ಆಳುತ್ತವೆ. ಹಳೇ ಯೋಚನೆಗಳ ಪಳೆಯುಳಿಕೆಗಳು ಒಂದು ಸ್ವಲ್ಪ ದೂರದ ತನಕ ಉಳಿದು ಬರಬಹುದೇ ಹೊರತು** ಅವು ಹೊಸ ಪೀಳಿಗೆಯನ್ನು ಆಳಲು ಸಾಧ್ಯವಿಲ್ಲ ಯಾಕೆಂದರೆ, ಅವರ ಬದುಕಿಗೆ ಅದರ ಅನಿವಾರ್ಯತೆ ಇರುವುದಿಲ್ಲ.

ಬದಲಾವಣೆ ಕಾಲ ಚಕ್ರದ ಜೊತೆಗೆ ಹಾಸುಹೊಕ್ಕಾಗಿರುವುದರಿಂದ ಬದಲಾವಣೆ ನಿಲ್ಲಿಸಬೇಕೆಂದರೆ ಕಾಲ ಚಕ್ರದ ಉರುಳುವಿಕೆಯನ್ನೇ ನಿಲ್ಲಿಸಬೇಕಾಗುತ್ತದೆ. ಇದು ಅಸಾಧ್ಯವಾದ ಮಾತಾಗಿದೆ.

# ಅರಣ್ಯದ ರಕ್ಷಣೆ ಎಲ್ಲಿ, ಹೇಗೆ — ಕೆಲವು ಅನ್ನಿಸಿಕೆಗಳು

(3ನೇ ಪುಟದಿಂದ)

ಅರಣ್ಯ ನಾಶ... ಹೀಗೆ ಯಾವುದೇ ಕೆಡುಕನ್ನಾದರೂ ದೊಡ್ಡ ಪ್ರಮಾಣದ್ದನ್ನು ಮೊದಲು ತಡೆಗಟ್ಟಬೇಕು. ದೊಡ್ಡದನ್ನು ನಡೆಯಗೊಟ್ಟು, ಸಣ್ಣ ಸಣ್ಣ ತೂತುಗಳನ್ನು ಮಾತ್ರ ಮುಚ್ಚುತ್ತಾ ಹೋದರೆ, ಸರ್ಕಾರದ, ಪತ್ರಿಕೆಗಳ ಹಾಗೂ ಆ ಮೂಲಕ ಜನತೆಯ ಕಣ್ಣಿಗೆ ಮಣ್ಣೆರಚಲು, ಅವರ ಬಾಯಿ ಮುಚ್ಚಿಸಲು ಅಂಕಿ-ಅಂಶಗಳು ಮಾತ್ರ ಸಿಗುತ್ತವೆಯೇ ಹೊರತು ಆ ಕೆಡುಕೇನೂ ಇಲ್ಲವಾಗುವುದಿಲ್ಲ ಎಂಬುದು ಎಲ್ಲರಿಗೂ ಗೊತ್ತು.

ಹಾಗೆಯೇ, ಅರಣ್ಯದ ನಾಶ ಮತ್ತು ಒತ್ತುವರಿ ಭಾರೀ ಪ್ರಮಾಣದಲ್ಲಿ ಆಗುತ್ತಿರುವುದೆಲ್ಲಿ? ಯಾರಿಂದ? ಒಂದು-ಎರಡು ಎಕರೆ ಭೂಮಿ ಕೆರೆಯುತ್ತ ಕುಳಿತಿರುವ ನಿರ್ಗತಿಕ ಬಗರ್‌ಹುಕುಂ ಸಾಗುವಳಿದಾರರಿಂದಲೆ? ತಮ್ಮ ಗದ್ದೆ ತೋಟಗಳ ಅಜು ಬಾಜು ಸವರುತ್ತ, ಮಣ್ಣು ಕಡಿಯುತ್ತ ಉಂಟಾದ 5-10 ಗುಂಟೆ ಜಾಗವನ್ನು ಜಮೀನಿಗೆ ಸೇರಿಸಿಕೊಳ್ಳುತ್ತ ಅರ್ಧ ಎಕರೆ-ಒಂದು ಎಕರೆ ಭೂಮಿಯನ್ನು 'ಹೆಚ್ಚುವರಿ'ಯಾಗಿ ಹೊಂದಿರುವ ಸಾಮಾನ್ಯ ರೈತರಿಂದಲೆ?

ಅಥವಾ "ಎಸ್ಟೇಟ್"ಗಳೆಂಬ ಪುಟ್ಟ ಪುಟ್ಟ 'ಸ್ವತಂತ್ರ' ಸಾಮ್ರಾಜ್ಯಗಳನ್ನೇ ಸೃಷ್ಟಿಸಿಕೊಂಡು ಇಡಿ ಇಡೀ ಹಳ್ಳಿ-ಗ್ರಾಮಗಳನ್ನೇ ಕಬಳಿಸಿ ಕುಳಿತಿರುವ, ಇನ್ನೂ ಕಬಳಿಸುತ್ತಿರುವ ಪ್ಲಾಂಟರುಗಳು; ದಟ್ಟ ಕಾಡುಗಳೊಳಗೆ ಕೂಲಿ ಕಾರ್ಮಿಕರನ್ನೂ, 'ಏಜೆಂಟ್'ಮರ ಕಟಿಕರನ್ನೂ ಹೊಗಿಸಿ, ಕಾಡಿನ ಲೂಟಿ ಮಾಡುತ್ತ ಕಾನೂನಿನ ಹಿಡಿತಕ್ಕೂ ಸಿಗದೆ ತಪ್ಪಿಸಿಕೊಳ್ಳುವ ದೊಡ್ಡ 'ಟಿಂಬರ್ ಮರ್ಚೆಂಟ್'ಗಳೆಂಬ ಕಾಡು ಕಳ್ಳರು; ತಮಗೆ ಬೇಕಾದ ಲಘು ಮರಗಳನ್ನು ಬೆಳೆಸಲು ದಟ್ಟ ಕಾಡುಗಳನ್ನೇ ನಿಃಶೇಷವಾಗಿ ತರಿವ ದೊಡ್ಡ ಕೈಗಾರಿಕೆಗಳು; ಜಲ ವಿದ್ಯುತ್ ಮತ್ತಿತರ ಯೋಜನೆಗಳಾಗುವಾಗ ಮುಳುಗಡೆಯಾಗುವ 'ಸೂರ್ಯ ರಶ್ಮಿ ನೆಲ ತಾಕದಂಥ' ಸಾವಿರಾರು ಎಕರೆ ದಟ್ಟ ಕಾಡುಗಳ ಜೊತೆಗೆ, ತಮ್ಮ ಅಪಾರ ಹಣದಾಹಕ್ಕಾಗಿ ಇನ್ನೂ ಸಾವಿರಾರು ಎಕರೆ ಕಾಡು ಕಡಿಯಲು ಅನುಮತಿ ನೀಡಿ ಅದಕ್ಕೆ ತಕ್ಕ ಯೋಜನೆ-ನೀಲಿ ನಕ್ಷೆಗಳನ್ನೆಲ್ಲ ಜಾರಿಗೆ ಕೊಡುವ (ಉದಾ: ವಾರಾಹಿ ಯೋಜನೆ) ದೊಡ್ಡ ಅರಣ್ಯಾಧಿಕಾರಿಗಳು ಹಾಗೂ ರಾಜಕಾರಣಿಗಳು- ಮುಂತಾದವರಿಂದಲೆ?

ಚಿಕ್ಕಮಗಳೂರು, ಶಿವಮೊಗ್ಗ, ಹಾಸನ, ಕೊಡಗು ಈ ನಾಲ್ಕು ಜಿಲ್ಲೆಗಳಲ್ಲಿ ಅಕ್ರಮ ಸಾಗುವಳಿಯಾಗಿದೆಯೆಂದು ಸರ್ಕಾರದ 'ಸಣ್ಣ' ಅಂದಾಜು ಹೇಳುವ ಸುಮಾರು 55ರಿಂದ 60 ಸಾವಿರ ಎಕರೆಗಳಷ್ಟು ಭೂಮಿಯಲ್ಲಿ ಬಡವರ ಬಗರ್‌ಹುಕುಂ ಸಾಗುವಳಿ ಅಬ್ಬಬ್ಬಾ! ಎಂದರೆ 5 ಸಾವಿರ ಎಕರೆಯಷ್ಟಿರಬಹುದೆ?

### ಇನ್ನೊಂದು ಬಗೆಯ ಲೂಟಿ

ಪ್ಲಾಂಟರುಗಳು ಇನ್ನೊಂದು ಬಗೆಯಲ್ಲಿ ಕಾನೂನಿನ ಕೈ ಕಟ್ಟಿಹಾಕಿ ಲೂಟಿ ಮಾಡುತ್ತಾರೆ. ಮೊದಲಿಗೆ, ಮಂಜೂರಾದ ಭೂಮಿಯನ್ನು ಬಿಟ್ಟು ಬೇರೆ ಸರ್ಕಾರಿ ಭೂಮಿಯನ್ನು ಒಡಲು ಎಸ್ಟೇಟ್ ಮಾಡುವುದು (ಲಂಚ ಏನು ಬೇಕಾದರೂ ಆಗುತ್ತಲ್ಲ-),

ಆಗ ಅಲ್ಲಿದ್ದ ಮರಗಳೆಲ್ಲ ಲೂಟಿಯಾಗಿರುತ್ತವೆ, ಈಗ ತನ್ನ ನಿಜವಾದ ಮಂಜೂರಾತಿ ಪತ್ರ ಬಳಸಿ ಪುನಃ ಅಷ್ಟೇ ಭೂಮಿಯನ್ನು ಕಬಳಿಸಿ (ಅಳತೆಯಲ್ಲಿ ಮತ್ತೆ ಲಂಚದ ಮಹಿಮೆ) ಪುನಃ ಕಾಡು ಲೂಟಿ... ಹೀಗೆ. ಕಾನೂನು, ಅರಣ್ಯ ಇಲಾಖೆ ಸದ್ಯದ ಕಾನೂನುಗಳಂತೆ ಇದನ್ನು ತಡೆಯಲಾರವು.

### ಯಾವ ರೀತಿ ಸೂಕ್ತ?

ಈ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡಾಗ, ಅರಣ್ಯ ಇಲಾಖೆಯವರು ಕಾಡಿನ ಒತ್ತುವರಿ ನಿಲ್ಲಿಸಬೇಕೆ, ಕಾಡಿನ ಲೂಟಿ ತಡೆಯಬೇಕೆ- ಈ ಮೇಲೆ ಹೇಳಿದಂಥ ಬೃಹತ್ ಪ್ರಮಾಣದ ಲೂಟಿ ತಡೆಯಬಹುದು, ಅದೇ ಒತ್ತುವರಿಗಳನ್ನು ನಿಲ್ಲಿಸಬಹುದು; ಹೊಸದಾಗಿ ಕಾಡು ಬೆಳೆಸಬೇಕೆ- ಬೋಳಾದ, ಬಂಜರಾದ ಗುಡ್ಡಗಳಿವೆ, ಬೆಟ್ಟ ನೆಲದ ಬಯಲುಗಳಿವೆ.

ಮೊದಲು ಈ ಕೆಲಸ ಆಗಬೇಕು. ದಟ್ಟ ಕಾಡುಗಳು ಯಾವ ಕಾರಣಕ್ಕೂ ಲೂಟಿಯಾಗದಂತೆ ನೋಡಿಕೊಳ್ಳಬೇಕು, ಅಲ್ಲಿ ಒತ್ತುವರಿ ಯಾರೇ ಮಾಡಲೆತ್ನಿಸಿದರೂ ಅದನ್ನು ತಡೆಯಬೇಕು.

ಎರಡನೆಯದಾಗಿ, ಪ್ಲಾಂಟೇಶನ್‌ಗಳಿಗಾಗಿ ಭೂಮಿಯನ್ನು ಸಾಧ್ಯವಾದಷ್ಟೂ ಊರ ಮಗ್ಗುಲಿನಿಂದ ಅಳೆಯದೆ ಗುಡ್ಡದ ಕಡೆಯಿಂದ ಅಳತೆ ಮಾಡಬೇಕು; ಊರ ಅಜು-ಬಾಜಿನ, ಕೃಷಿಗೆ ಯೋಗ್ಯವಾದಂಥ ಭೂಮಿಯನ್ನು ರೈತರ ಉಪಯೋಗಕ್ಕೇ ಬಿಡುವುದು ಒಳ್ಳೆಯದು.

ದಾವಣ ಗ್ರಾಮದಲ್ಲಿ ವಲಯ ಅರಣ್ಯಾಧಿಕಾರಿಗಳು ಮಾನವೀಯತೆಯಿಂದ ಸಮಸ್ಯೆಯನ್ನು ಬಹುಮಟ್ಟಿಗೆ ನಿಭಾಯಿಸಿದ್ದಾರೆಂಬುದನ್ನು ಯಾರೂ ಅಲ್ಲಗಳೆಯುತ್ತಿಲ್ಲ. ಅಂತೆಯೇ, ಲಕ್ಷ್ಮೀದೇವಿಯವರು ಹೇಳುವಂತೆ, ದಬ್ಬಾಳಿಕೆ-ಅದೆಷ್ಟೇ ಸಣ್ಣ ಪ್ರಮಾಣದ್ದಾಗಿರಲಿ, ನಡೆದಿದೆ ಎಂಬುದನ್ನೂ ಅಲ್ಲಗಳೆಯುವಂತಿಲ್ಲ. ಇನ್ನೂ ಸರ್ವೆ ಆಗಿಲ್ಲದ, ಖಾಯಂ ಮಾಡಲು ಯೋಗ್ಯವಾಗಿರುವ ಈ ಪ್ರಕರಣದಲ್ಲಿ ಅರ್ಧ-ಮುಕ್ಕಾಲು ಎಕರೆಗಳಲ್ಲ ಇಷ್ಟೊಂದು ಕಠಿಣವಾಗಿ 'ಕಾನೂನನ್ನು' ಚಲಾಯಿಸುವ ಅಗತ್ಯವಿತ್ತೆ?

### ಉನ್ನತ ಮಟ್ಟದಲ್ಲಿ

2-4-87 ರಲ್ಲಿ ರಾಜ್ಯ ಸರ್ಕಾರದ ಕಂದಾಯ ಕಾರ್ಯದರ್ಶಿಗಳ ಕಚೇರಿಯಲ್ಲಿ ಕಂದಾಯ ಮತ್ತು ಅರಣ್ಯ ಇಲಾಖೆಗಳ ವಿಭಾಗ ಮತ್ತು ಜಿಲ್ಲಾ ಮಟ್ಟದ ಅಧಿಕಾರಿಗಳ ಸಭೆ ನಡೆದು, ಏಪ್ರಿಲ್ 78 ರಿಂದ ಈಚೆಗಿನ ಎಲ್ಲಾ ಬಗರ್‌ಹುಕುಂ ಸಾಗುವಳಿಗಳನ್ನೂ ನಿರ್ದಾಕ್ಷಿಣ್ಯವಾಗಿ ಖುಲ್ಲಾ ಮಾಡಿಸುವಂತೆ ನಿರ್ಣಯ ಮಾಡಿದೆ. ಸಣ್ಣ ಪುಟ್ಟ ಅಕ್ರಮ ಸಾಗುವಳಿಗಾರರ ಮೇಲೆ ಉಗ್ರ ಕ್ರಮ ಕೈಗೊಳ್ಳಲು ಅಧಿಕಾರಿಗಳಿಗೆ ಇದೇ 'ಹಸಿರು ಸಿಗ್ನಲ್' ಆಗಿದೆ.

ಆದರೆ, ಹತ್ತಾರು ಎಕರೆಗಟ್ಟಲೆ ಅಕ್ರಮ ಸಾಗುವಳಿ ಮಾಡಿರುವ ಯಾವನೇ ಶ್ರೀಮಂತನ ವಿರುದ್ಧ ಇಂಥ ಉಗ್ರ ಕ್ರಮದ ಒಂದೇಶವನ್ನೂ ಚಲಾಯಿಸಲು ತಮಗೆ ಸಾಧ್ಯವಿಲ್ಲ ಎಂಬುದನ್ನು ಅರಣ್ಯ ಅಧಿಕಾರಿಗಳು ಜ್ಞಾಪಕವಿಡುವುದರ ಜೊತೆಗೆ, 1978 ರಲ್ಲಿ ಆವರೆಗಿನ ಎಲ್ಲಾ ಬಗರ್‌ಹುಕುಂ ಅನ್ನೂ ಖಾಯಂ ಮಾಡಿ ಅನಂತರ ಒತ್ತುವರಿಗೆ ಕಟ್ಟುನಿಟ್ಟಾಗಿ ಅವಕಾಶಕೊಡಕೂಡದೆಂದು ಸರ್ಕಾರ ತೆಗೆದುಕೊಂಡಿದ್ದ ನಿರ್ಣಯ ಆಗಲೇ ಜಾರಿಗೆ ಬಂದಿಲ್ಲದ ಕಾರಣ ಅನಂತರವೂ ಒತ್ತುವರಿ ಸಾಗುವಳಿಯಾಗುತ್ತ ಬಂದಿರುವುದನ್ನೂ ಗಣನೆಗೆ ತೆಗೆದುಕೊಂಡು ಅದಕ್ಕೆ ತಕ್ಕ ಕಾರ್ಯ-ಸಾಧ್ಯವಾದ ಪರಿಹಾರ ರೂಪಿಸಬೇಕಾಗಿದೆ.

**ಆದ್ದರಿಂದ ಉನ್ನತ ಮಟ್ಟದಲ್ಲಿ ಈ ಬಗ್ಗೆ ಚರ್ಚೆಯ ಅವಕಾಶ ಬಂದಾಗ, ಸಣ್ಣ ಪುಟ್ಟ ಬಗರ್‌ಹುಕುಂ ಸಾಗುವಳಿದಾರರ ಕಡೆ ಗಮನ ಕೇಂದ್ರೀಕರಿಸುವ ಬದಲು, ಹಿಂದೆ ಹೇಳಿದಂಥ ದೊಡ್ಡ ಪ್ರಮಾಣದ ಕಾಡು ನಾಶ, ಒತ್ತುವರಿಗಳನ್ನು ತಡೆಗಟ್ಟುವ, ಖುಲ್ಲಾ ಮಾಡಿಸುವ ಬಗ್ಗೆ ಕಟ್ಟುನಿಟ್ಟಿನ ಕ್ರಮಗಳನ್ನು ಯೋಚಿಸುವುದು ಬಹಳ ಸೂಕ್ತ.**

ಅಲ್ಲಿಯವರೆಗೆ, ಪ್ಲಾಂಟೇಶನ್ ಮಾಡುವುದು ಮುಂತಾದ ಸಂದರ್ಭಗಳಲ್ಲಿ ಸಾಧ್ಯವಾದಷ್ಟೂ, **ಅರಣ್ಯ ಇಲಾಖೆಗೆ ಸೇರಿದ್ದೆನ್ನಲಾದ ಕೃಷಿ ಯೋಗ್ಯ ಭೂಮಿಯಲ್ಲಿ ಬಡವರು ಬಗರ್‌ಹುಕುಂ ಸಾಗುವಳಿ ಮಾಡಿರುವ ಭೂಮಿಯು 'ತಂಟೆಗೆ' ಹೋಗದೆ, ಇಂಥ ವಿವಾದಗಳು, ಅನಂತರದ ದಬ್ಬಾಳಿಕೆ-ನೋವು-ಹಿಂಸೆ-ನಷ್ಟಗಳು, ಪ್ರತಿಭಟನೆಗಳು, 'ಪ್ರತಿಷ್ಠೆ'ಗಳು ಮುಂತಾದುವನ್ನು ತಪ್ಪಿಸಿಕೊಳ್ಳುವುದು (avoid) ಎಲ್ಲಾ ದೃಷ್ಟಿಯಿಂದಲೂ ಸೂಕ್ತ.**

—ಸಿರಿಮನೆ ನಾಗರಾಜ್.



ಸಿ ವಷ- ಈ ...
...ವೃದ್ಧಿ ಅಧಿಕಾರಿಗಳಿಗೆ ತಲೆ 15

...ಮುದ್ರಿತ ಸ್ಥಳ, ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: [illegible] ಅಚ್ಚುಕೂಟ, ಕೊಪ್ಪ